ಲಿಖಿತ ಮೂಲಕ ಉತ್ತರಿಸುವ
ಪ್ರಶ್ನೆ



ಕರ್ನಾಟಕ ವಿಧಾನ ಪರಿಷತ್ತು
ನೂರ ನಲವತ್ತಮೂರನೆಯ ಅಧಿವೇಶನ
ಸೋಮವಾರ, ದಿನಾಂಕ : 01 ನೇ ಫೆಬ್ರುವರಿ, 2021

ಕಾರ್ಮಿಕರಿಂದ ಸಂಗ್ರಹಿಸುತ್ತಿರುವ ವಂತಿಗೆ ಬಗ್ಗೆ

ಶ್ರೀ ಎಂ.ಎ. ಗೋಪಾಲಸ್ವಾಮಿ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ) :-

84 (84) ಮಾನ್ಯ ಕಾರ್ಮಿಕ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ :-

(ಅ) ರಾಜ್ಯದಲ್ಲಿ ಇಲ್ಲಿಯವರೆಗೆ ಕಾರ್ಮಿಕರ ವಂತಿಗೆಯಿಂದ ಸಂಗ್ರಹವಾಗಿರುವ ನಿಧಿಯ ಮೊತ್ತವೆಷ್ಟು; ಈ ನಿಧಿಯನ್ನು ಯಾವ ಸಂಸ್ಥೆ ನಿರ್ವಹಣೆ ಮಾಡುತ್ತಿದೆ ; (ವಿವರ ನೀಡುವುದು)

(ಆ) ಈ ನಿಧಿಯಿಂದ ಕಾರ್ಮಿಕ ವರ್ಗಕ್ಕೆ ಕಲ್ಪಿಸುತ್ತಿರುವ ಅಭಿವೃದ್ಧಿ ಯೋಜನೆಗಳು ಯಾವುವು; ಈ ಯೋಜನೆಗಳಿಗಾಗಿ ಇಲ್ಲಿಯವರೆಗೆ ಖರ್ಚಾಗಿರುವ ಮೊತ್ತವೆಷ್ಟು ; (ಸಂಪೂರ್ಣ ವಿವರ ನೀಡುವುದು)

(ಇ) ಈ ಯೋಜನೆಗಳಲ್ಲಿ ಸಾಕಷ್ಟು ದುರುಪಯೋಗಗಳು ಆಗುತ್ತಿದ್ದು, ಸೌಲಭ್ಯಗಳು ಕಾರ್ಮಿಕರಿಗೆ ಸಕಾಲದಲ್ಲಿ ತಲುಪುತ್ತಿಲ್ಲವೆಂಬ ವಿಷಯವು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಈ ಸಂಬಂಧ ಸರ್ಕಾರವು ಕೈಗೊಂಡಿರುವ ಕ್ರಮಗಳೇನು ?